ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಜೆ.ಟಿ.ಓ. ಗಳಿಸಿ 10 ವರ್ಷದ ಕಾಲಮಿತಿ ಬಡ್ತಿ ನೀಡಿಕೆ ಬಗ್ಗೆ

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) :-

1452 (1725) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರಿ ಐ.ಟಿ.ಐ. ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಿರಿಯ ತರಬೇತಿ ಅಧಿಕಾರಿಗಳಿಗೆ (ಜೆ.ಟಿ.ಓ.) ನಿಗದಿತ ಸಮಯದಲ್ಲಿ ತರಬೇತಿ ನೀಡದಿರಲು ಕಾರಣಗಳೇನು ; (ವಿವರ ನೀಡುವುದು)

(ಆ) ತರಬೇತಿ ನಂತರ ಸೇವೆಯನ್ನು ಪರಿಗಣಿಸಿ, 10 ವರ್ಷದ ಕಾಲಮಿತಿ ಬಡ್ತಿಯನ್ನು ನೀಡುತ್ತಿರುವುದರಿಂದ ಅವರಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಸೇವೆಗೆ ಸೇರಿದ ದಿನದಿಂದ ಸೇವೆಯನ್ನು ಪರಿಗಣಿಸಿ 10 ವರ್ಷದ ಕಾಲಮಿತಿ ಬಡ್ತಿಯನ್ನು ನೀಡಲು ಸರ್ಕಾರ ಯಾವ ಕ್ರಮ ಕೈಗೊಳ್ಳುತ್ತದೆ ;

(ಈ) 2010ನೇ ಸಾಲಿನಲ್ಲಿ ನೇಮಕಗೊಂಡ ಜೆ.ಟಿ.ಓ. ಗಳ ನೇಮಕಾತಿ ಸಂಬಂಧ ಇದುವರೆವಿಗೂ ಅವರ ಪರೀಕ್ಷಾ ಪೂರ್ವ ಅವಧಿ (ಪ್ರೊಬೆಷನರಿ ಪೀರಿಯಡ್) ಘೋಷಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಯಾವ ಕಾಲಮಿತಿಯಲ್ಲಿ ಸದರಿ ಪರೀಕ್ಷಾ ಪೂರ್ವ ಅವಧಿಯನ್ನು (ಪ್ರೊಬೆಷನರಿ ಪೀರಿಯಡ್) ಘೋಷಿಸಲಾಗುವುದು ?